KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜೂನ್ ೧೦, ೨೦೧೦ (ಜ್ಯೇಷ್ಠ ೨೦, ಶಕ ವರ್ಷ ೧೯೩೨) | ಸಂಚಿಕೆ ೨೩ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್.(ಎನ್.ಎ)(109)ಸಿ.ಆರ್:3/10-11, ಬೆಂಗಳೂರು, ದಿನಾಂಕ: 10ನೇ ಮೇ 2010**

**ವಿಷಯ:** ಶ್ರೀ ದುರ್ಗಾಂಭ ಎಜುಕೇಷನ್ ಟ್ರಸ್ಟ್ (ರಿ), ಮರಳೇನಹಳ್ಳಿ, ಶಿರಾರಸ್ತೆ, ತುಮಕೂರು 572106 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ದುರ್ಗಾಂಭ ಎಜುಕೇಷನ್ ಟ್ರಸ್ಟ್ (ರಿ), ಮರಳೇನಹಳ್ಳಿ, ಶಿರಾರಸ್ತೆ, ತುಮಕೂರು 572106 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿ.ಆರ್:15/09-10, ದಿನಾಂಕ: 23.4.2010 ರಲ್ಲಿ ಪ್ರಸ್ತಾವಿತ ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9-00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿ.ನಂ.177/2004-05, ದಿನಾಂಕ: 29.10.2004ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ

ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶ್ರೀ ದುರ್ಗಾಂಭ ಎಜುಕೇಷನ್ ಟ್ರಸ್ಟ್ (ರಿ), ಮರಳೇನಹಳ್ಳಿ, ಶಿರಾರಸ್ತೆ, ತುಮಕೂರು 572106 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 165

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್.(ಎನ್.ಎ)(109)ಸಿ.ಆರ್:10/09–10, ಬೆಂಗಳೂರು, ದಿನಾಂಕ: 10ನೇ ಮೇ 2010**

**ವಿಷಯ:** ಶ್ರೀದೇವಿ ಚಾರಿಟಬಲ್ ಟ್ರಸ್ಟ್, ಶಿವದೀಪ್ತಿ, 3ನೇ ಕ್ರಾಸ್, ಎಸ್.ಎಸ್. ಪುರಂ, ತುಮಕೂರು 572102 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀದೇವಿ ಚಾರಿಟಬಲ್ ಟ್ರಸ್ಟ್, ಶಿವದೀಪ್ತಿ, 3ನೇ ಕ್ರಾಸ್, ಎಸ್.ಎಸ್. ಪುರಂ, ತುಮಕೂರು 572102 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು

ಉತ್ತರ (ಅಪರ) ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿ.ಆರ್:4/09–10, ದಿನಾಂಕ: 23.4.2010 ರಲ್ಲಿ ಪ್ರಸ್ತಾವಿತ ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿ.ನಂ.158/01–02, ದಿನಾಂಕ: 9.4.2001ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶ್ರೀದೇವಿ ಚಾರಿಟಬಲ್ ಟ್ರಸ್ಟ್, ಶಿವದೀಪ್ತಿ, 3ನೇ ಕ್ರಾಸ್, ಎಸ್.ಎಸ್. ಪುರಂ, ತುಮಕೂರು 572102 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 166

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ

**ನಂ: ಎಲ್.ಆರ್.ಎಫ್.(ಎನ್.ಎ)(109)ಸಿ.ಆರ್:11/09–10, ಬೆಂಗಳೂರು, ದಿನಾಂಕ: 10ನೇ ಮೇ 2010**

**ವಿಷಯ:** ಶ್ರೀ ರಮಣ ಮಹರ್ಷಿ ಎಜುಕೇಷನ್ ಟ್ರಸ್ಟ್, ಶಿರಾ ರಸ್ತೆ, ತುಮಕೂರು 572106 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ರಮಣ ಮಹರ್ಷಿ ಎಜುಕೇಷನ್ ಟ್ರಸ್ಟ್, ಶಿರಾ ರಸ್ತೆ, ತುಮಕೂರು 572106 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿ.ಆರ್:5/09–10, ದಿನಾಂಕ: 23.4.2010 ರಲ್ಲಿ ಪ್ರಸ್ತಾವಿತ ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿ.ನಂ.24/2003–04, ದಿನಾಂಕ: 8.5.2003ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995 ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆಕಾವಲ್ ಗ್ರಾಮದ ಸ.ನಂ. 72 ರಲ್ಲಿ 9–00 ಎಕರೆ ಜಮೀನನ್ನು ಶ್ರೀ ರಮಣ ಮಹರ್ಷಿ ಎಜುಕೇಷನ್ ಟ್ರಸ್ಟ್, ಶಿರಾ ರಸ್ತೆ, ತುಮಕೂರು 572106 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಹೆಚ್. ರಾಮಾಂಜನೇಯ**
ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 167

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ನಮೂನೆ–27**

**ಅಧಿಸೂಚನೆ**

**ನಂ.ಎಲ್‌ಎನ್‌ಡಿ.ಸಿಆರ್.233/09–10, ಚದಲುಪುರ, ದಿನಾಂಕ: 8ನೇ ಮೇ 2010**

**ವಿಷಯ:** ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಶಿಡ್ಲಘಟ್ಟ ಬಾಗಿಲು ಗ್ರಾಮದ ಸ.ನಂ.172 ರ ಪೈಕಿ 3–00 ಎಕರೆ ಜಮೀನನ್ನು ಚಿಕ್ಕಬಳ್ಳಾಪುರ ನಗರ ಪ್ರವಾಸಿ ಮಂದಿರ ಕಟ್ಟಡ ನಿರ್ಮಿಸಲು ಲೋಕೋಪಯೋಗಿ ಇಲಾಖೆಗೆ ಇವರಿಗೆ ಹಸ್ತಾಂತರಿಸುವ ಸಲುವಾಗಿ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ, ಸದರಿ ಶೀರ್ಷಿಕೆಯಿಂದ ತಗ್ಗಿಸಿ ಮುಂದಿನ ಕ್ರಮ ಕೈಗೊಳ್ಳುವ ವಿಚಾರ.

**ಉಲ್ಲೇಖ:** 1. ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ವರದಿ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.186/09–10, ದಿನಾಂಕ:20/03/2010.
2. ತಹಶೀಲ್ದಾರ್, ಚಿಕ್ಕಬಳ್ಳಾಪುರ ತಾಲ್ಲೂಕು ರವರ ವರದಿ ಸಂಖ್ಯೆ: ಎಲ್‌ಎನ್‌ಡಿ.ಸಿಆರ್.278/09–10, ದಿನಾಂಕ: 19/03/2010.

**94ನೇ ನಿಯಮದ 68(1) ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ **"ಕೆರೆ ಅಂಗಳ ಖರಾಬು"** ಪ್ರದೇಶದ ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕೆ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸದರಿ **"ಕೆರೆ ಅಂಗಳ ಖರಾಬು"** ಪ್ರದೇಶವು ಸದರಿ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಸದರಿ **"ಕೆರೆ ಅಂಗಳ ಖರಾಬು"** ಪ್ರದೇಶದ ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸದರಿ **"ಕೆರೆ ಅಂಗಳ ಖರಾಬು"** ಪ್ರದೇಶದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಜಮೀನನ್ನು ಸರ್ಕಾರದ ಇತರೇ ಉದ್ದೇಶಕ್ಕೆ ಪಡೆದುಕೊಳ್ಳುತ್ತಿರುವುದರಿಂದ ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

| | | |
|---|---|---|
| ಜಿಲ್ಲೆ | : | ಚಿಕ್ಕಬಳ್ಳಾಪುರ |
| ತಾಲ್ಲೂಕು | : | ಚಿಕ್ಕಬಳ್ಳಾಪುರ |
| ಹೋಬಳಿ | : | ಕಸಬಾ |
| ಗ್ರಾಮ | : | ಶಿಡ್ಲಘಟ್ಟ ಬಾಗಿಲು |

ಸರ್ವೆ ನಂಬರು 172 ರ ಪೈಕಿ 3–00 ಎಕರೆ ಜಮೀನನ್ನು ಚಿಕ್ಕಬಳ್ಳಾಪುರ ನಗರ ಪ್ರವಾಸಿ ಮಂದಿರ ಕಟ್ಟಡ ನಿರ್ಮಿಸಲು ಲೋಕೋಪಯೋಗಿ ಇಲಾಖೆ ಇವರಿಗೆ ವರ್ಗಾವಣೆ ಮಾಡುವ ಸಲುವಾಗಿ ಸಾರ್ವಜನಿಕ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ಸ.ನಂ.173, 174, 175, 176, 177, 178 ರ ಜಮೀನು |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ನೀರಿನ ಶುದ್ಧೀಕರಣ ಘಟಕಕ್ಕೆ ಪ್ರಸ್ತಾಪಿಸಿರುವ ಪ್ರದೇಶ |

ಜಿಲ್ಲಾಧಿಕಾರಿ,

ಪಿ.ಆರ್. 189 ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಉಪನಗರ, ಬೆಂಗಳೂರು**

**ನಮೂನೆ–27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಸಾರ್ವಜನಿಕ ಪ್ರಕಟಣೆ**

**ಸಂ: 94(ಸಿ): 01 : 10–11**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ 02, ಸರ್ಕಾರಿ ಗುಂಡು ತೋಪು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ, ಗ್ರಾಮಠಾಣಾದಲ್ಲಿರುವ 94(ಸಿ) ರಡಿ ಸಕ್ರಮಕ್ಕೆ ಹಾಕಿರುವ ಸುಮಾರು ಮೂರು ಜನ ಅರ್ಜಿದಾರರುಗಳಿಗೆ ಸಕ್ರಮಗೊಳಿಸುವಲ್ಲಿ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸ.ನಂ. 2 ಸ.ಗುಂಡು ತೋಪು ಜಮೀನನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಅಥವಾ ಅದರ ಮೇಲಿನ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತವೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಈ ರೀತಿ ಸ.ನಂ. 2, ಸ.ಗುಂಡು ತೋಪು ಜಮೀನನ್ನು ಸಾರ್ವಜನಿಕ ಉದ್ದೇಶದಿಂದ ಖಾಯಂ ಆಗಿ ಮುಚ್ಚಲು ಉದ್ದೇಶಿಸಿದೆ. ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮದ ರೀತಿಯನ್ನು ವಿವರದೊಂದಿಗೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

| | | | **ಚಕ್ಕುಬಂದಿ** | | |
|---|---|---|---|---|---|
| ಗ್ರಾಮ | : | ಅಳ್ಳಾಳಸಂದ್ರ | | | |
| ಹೋಬಳಿ | : | ಯಲಹಂಕ | ಪೂರ್ವ | : | ಹಳ್ಳ |
| ತಾಲ್ಲೂಕು | : | ಬೆಂ.ಉತ್ತರ (ಅಪರ)ತಾ: | ಪಶ್ಚಿಮ | : | ಸ.ನಂ.2 |
| ಜಿಲ್ಲೆ | : | ಬೆಂಗಳೂರು ನಗರ | ಉತ್ತರ | : | ಸ.ನಂ.2ರ ಉಳಿಕೆ |
| ಸರ್ವೆ ನಂಬರ್ | : | 02 | ದಕ್ಷಿಣ | : | ಸ.ನಂ.2ರ ಉಳಿಕೆ |
| ವಿಸ್ತೀರ್ಣ | : | 3–25 | | | |

ತಹಸೀಲ್ದಾರ್

ಪಿ.ಆರ್. 191 ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ, ಬೆಂಗಳೂರು

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯಿದೆ ಕಲಂ–6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ. 28 :ಭೂಸ್ವಾಚ:2008, ದಿನಾಂಕ: 20ನೇ ಮೇ 2010**

ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಜಗಳೂರು ಮತ್ತು ಹರಪನಹಳ್ಳಿ ತಾಲ್ಲೂಕುಗಳ 22 ಕೆರೆಗಳನ್ನು ತುಂಬಿಸುವ ಜಾಕ್‌ವೆಲ್–1, ಪಂಪ್‌ಹೌಸ್ ಮತ್ತು ಇನ್‌ಟೇಕ್ ಕೆನಲ್ ಸಲುವಾಗಿ ಅಗತ್ಯವಾಗಿದೆಯೆಂದು ದಾವಣಗೆರೆ ಜಿಲ್ಲೆ ಜಿಲ್ಲಾಧಿಕಾರಿಗಳವರ ಪತ್ರದ ಸಂ:ಎಲ್‌ಎಕ್ಯೂ.ಸಿಆರ್.15/09–10, ದಿ: 12.10.09ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ

ಮತ್ತು ಕರ್ನಾಟಕ ಕಾಯ್ದೆ:33–1991ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894ರ 1) 5–ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1–ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ:

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿದೆ ಎಂದು ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ಉಪವಿಭಾಗಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ಭೂ ಸ್ವಾಧೀನಾಧಿಕಾರಿಗಳು, ದಾವಣಗೆರೆ ಇವರನ್ನು ಸದರಿ ಜಮೀನುಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಯವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ : ದಾವಣಗೆರೆ** **ತಾಲ್ಲೂಕು: ಹರಿಹರ** **ಹೋಬಳಿ: ಕಸಬಾ** **ಗ್ರಾಮ: ಹಲಸಬಾಳು**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಬೇಕಾಗುವ ಜಮೀನಿನ ಅಂದಾಜು | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 1 | ಬಸಯ್ಯ ಬಿನ್ ಶಿವಯ್ಯ ರಾಜನಹಳ್ಳಿ | ಬಸಯ್ಯ ಬಿನ್ ಶಿವಯ್ಯ ರಾಜನಹಳ್ಳಿ | 1/1ಪಿ1 | ಖುಷ್ಕಿ | 2/1ಪಿಪಿ2 | 1/1ಪಿ2 | ತುಂಗಭದ್ರ ನದಿ | 1/ಪಿ1 | 1–39<br>0–15 ಖ | 3–85 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಬೇಕಾಗುವ ಜಮೀನಿನ ಅಂದಾಜು | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 2 | ನಾಗರಾಜಪ್ಪ ಬಿನ್ ಶಿವಾನಂದಯ್ಯ, ಮಂಜುನಾಥ ಬಿನ್ ಶಿವಾನಂದಯ್ಯ | ನಾಗರಾಜಪ್ಪ ಬಿನ್ ಶಿವಾನಂದಯ್ಯ, ಮಂಜುನಾಥ ಬಿನ್ ಶಿವಾನಂದಯ್ಯ | 1/1ಪಿ2 | ಖುಷ್ಕಿ | 1ಪಿ1 | ಗಡಿ | ತುಂಗಭದ್ರ ನದಿ | 1ಪಿ2 | 1–39<br>0–15 ಖ | 3–85 |
| 3 | ಕೆ. ಹನುಮಂತಪ್ಪ ಬಿನ್ ಬಸಪ್ಪ | ಕೆ. ಹನುಮಂತಪ್ಪ ಬಿನ್ ಬಸಪ್ಪ | 2/1ಪಿಪಿ1 | ಖುಷ್ಕಿ | 2/1ಪಿಪಿ2 | 1/ಪಿ1 | ತುಂಗಭದ್ರ ನದಿ | 2/1ಪಿಪಿ1 | 2–04<br>0–03 ಖ | 3–65 |
| 4 | ಭರ್ಮಪ್ಪ ಬಿನ್ ಮಹದೇವಪ್ಪ | ಭರ್ಮಪ್ಪ ಬಿನ್ ಮಹದೇವಪ್ಪ | 2/1ಪಿಪಿ2 | ಖುಷ್ಕಿ | 2/2 | 2/1ಪಿಪಿ1 | ತುಂಗಭದ್ರ ನದಿ | 2/1ಪಿಪಿ2 | 1–08<br>0–01 ಖ | 2–08 |
| 5 | ಲಲಿತಮ್ಮ ಕೋಂ ಪುಟ್ಟಪ್ಪ | ಲಲಿತಮ್ಮ ಕೋಂ ಪುಟ್ಟಪ್ಪ | 2/2 | ಖುಷ್ಕಿ | 3/3 | 2/1ಪಿಪಿ2 | ತುಂಗಭದ್ರ ನದಿ | 2/2 | 2–15<br>0–03 | 4–12 |
| 6 | ಹೆಚ್.ವೈ.ಹನುಮಂತಪ್ಪ ಬಿನ್ ಹೆಚ್.ಎ. ಮಲ್ಲೇಶಪ್ಪ | ಹೆಚ್.ವೈ.ಹನುಮಂತಪ್ಪ ಬಿನ್ ಹೆಚ್.ಎ. ಮಲ್ಲೇಶಪ್ಪ | 3/4ಪಿ2 | ಖುಷ್ಕಿ | ರಾ.ಹೆ.ಗೆ ಭೂಸ್ವಾಧೀನ | 3/3 | ತುಂಗಭದ್ರ ನದಿ | 3/4, 5 | 0–24<br>0–02 ಖ | 1–04 |
| 7 | ಆರ್. ನಿಂಗಪ್ಪ ಬಿನ್ ನಾಗಪ್ಪ | ಆರ್. ನಿಂಗಪ್ಪ ಬಿನ್ ನಾಗಪ್ಪ | 3/7 | ಖುಷ್ಕಿ | 3/4ಪಿ | 2/2 | ತುಂಗಭದ್ರ ನದಿ | 3/2 | 0–20<br>0–08 ಖ | 0–87 |
| | | | | | | | | **ಒಟ್ಟು** | **10–29**<br>**1–07 ಖ** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 184

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)